# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 325
ಸದಸ್ಯರ ಹೆಸರು : ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 06-03-2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆಯಲ್ಲಿರುವ ಗ್ರಾಮ ಪಂಚಾಯಿತಿಗಳಿಗೆ ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; ಈ ಅನುದಾನವನ್ನು ಯಾವ ಯಾವ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ; (ಗ್ರಾಮ ಪಂಚಾಯಿತಿವಾರು ವಿವರ ನೀಡುವುದು) | ಹಾಸನ ಜಿಲ್ಲೆಯಲ್ಲಿರುವ ಗ್ರಾಮ ಪಂಚಾಯಿತಿಗಳಿಗೆ ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅನುದಾನದ ವಿವರ ಮತ್ತು ಅನುದಾನವನ್ನು ಖರ್ಚು ಮಾಡಿರುವ ಗ್ರಾಮ ಪಂಚಾಯಿತಿವಾರು ವಿವರವನ್ನು ಅನುಬಂಧ-1 ರಲ್ಲಿ ಮಾನ್ಯ ಸದಸ್ಯರಿಗೆ ಪ್ರತ್ಯೇಕವಾಗಿ ಸಿ.ಡಿ. ಮೂಲಕ ನೀಡಿದೆ. |
| ಆ | ಸರ್ಕಾರದ ಯಾವ ಯಾವ ಕಾರ್ಯಕ್ರಮ/ಯೋಜನೆಗಳಿಗಾಗಿ ಗ್ರಾಮ ಪಂಚಾಯಿತಿಗಳ ಮೂಲಕ ಜಾರಿಗೆ ಬರುತ್ತಿವೆ; ಈ ಕಾರ್ಯಕ್ರಮ/ಯೋಜನೆಗಳಿಗಾಗಿ ಕಳೆದ 3 ವರ್ಷಗಳಲ್ಲಿ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನವೆಷ್ಟು; ಇದರಲ್ಲಿ ಖರ್ಚಾದ ಅನುದಾನವೆಷ್ಟು; (ಫಲಾನುಭವಿ ವಿವರಗಳೊಂದಿಗೆ ಗ್ರಾಮ ಪಂಚಾಯಿತಿವಾರು ವಿವರ ನೀಡುವುದು) | ಗ್ರಾಮ ಪಂಚಾಯತಿಗಳಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ, ಸ್ವಚ್ಛ ಭಾರತ್ ಮಿಷನ್, ವಿವಿಧ ವಸತಿ ಯೋಜನೆಗಳಾದ ಬಸವ ವಸತಿ, ಅಂಬೇಡ್ಕರ್ ವಸತಿ, ಪ್ರಧಾನ ಮಂತ್ರಿ ಆವಾಸ್ ಯೋಜನೆ ಮತ್ತು 14ನೇ ಹಣಕಾಸು ಆಯೋಗದ ಅನುದಾನದ ಕಾರ್ಯಕ್ರಮ / ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಮೇಲ್ಕಂಡ ಕಾರ್ಯಕ್ರಮ / ಯೋಜನೆಗಳಡಿ ಹಾಸನ ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ ಕಳೆದ 3 ವರ್ಷಗಳಲ್ಲಿ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನ, ಇದರಲ್ಲಿ ಖರ್ಚಾದ ಅನುದಾನ ಮತ್ತು ಫಲಾನುಭವಿ ವಿವರಗಳೊಂದಿಗೆ ಗ್ರಾಮ ಪಂಚಾಯಿತಿವಾರು ವಿವರವನ್ನು ಅನುಬಂಧ-1 ರಲ್ಲಿ ಮಾನ್ಯ ಸದಸ್ಯರಿಗೆ ಪ್ರತ್ಯೇಕವಾಗಿ ಸಿ.ಡಿ. ಮೂಲಕ ನೀಡಿದೆ. |
| ಇ | ಕಳೆದ 3 ವರ್ಷಗಳಲ್ಲಿ ಈ ಗ್ರಾಮ ಪಂಚಾಯಿತಿಗಳು ಕರಗಳ ರೂಪದಲ್ಲಿ ಸಾರ್ವಜನಿಕರಿಂದ ಸ್ವೀಕರಿಸಿರುವ ಆದಾಯವೆಷ್ಟು; ಈ ಆದಾಯವನ್ನು ಯಾವ ಯಾವ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ; ಗ್ರಾಮ ಪಂಚಾಯಿತಿವಾರು ವಿವರ ನೀಡುವುದು. | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯ ಗ್ರಾಮ ಪಂಚಾಯತಿಗಳು ತೆರಿಗೆ ರೂಪದಲ್ಲಿ ಸಾರ್ವಜನಿಕರಿಂದ ಸ್ವೀಕರಿಸಿರುವ ಆದಾಯದ ವಿವರವನ್ನು ಗ್ರಾಮ ಪಂಚಾಯತಿವಾರು ಅನುಬಂಧ-2 ರಲ್ಲಿ ಮಾನ್ಯ ಸದಸ್ಯರಿಗೆ ಪ್ರತ್ಯೇಕವಾಗಿ ಸಿ.ಡಿ. ಮೂಲಕ ನೀಡಿದೆ.<br><br>ತೆರಿಗೆ ರೂಪದಲ್ಲಿ ಗ್ರಾಮ ಪಂಚಾಯತಿಗಳು ಸ್ವೀಕರಿಸಿದ ಹಣವನ್ನು ಗ್ರಾಮ ಪಂಚಾಯತಿ ಸಿಬ್ಬಂದಿಗಳ ವೇತನ ಪಾವತಿ, ಆಡಳಿತಾತ್ಮಕ ವೆಚ್ಚ, ಕುಡಿಯುವ ನೀರು, ವಿದ್ಯುತ್ ಬಿಲ್ ಮೊತ್ತ, ರಸ್ತೆ, ಚರಂಡಿ ನಿರ್ವಹಣೆ ಮತ್ತು ಇತರೆ ಉದ್ದೇಶಗಳಿಗಾಗಿ ವೆಚ್ಚ ಮಾಡಲಾಗಿದೆ. |
| ಈ | ಹಾಸನ ಜಿಲ್ಲೆಯ ಯಾವ ಗ್ರಾಮ ಪಂಚಾಯಿತಿಗಳು ಸ್ವಂತ ಕಟ್ಟಡಗಳನ್ನು ಹೊಂದಿವೆ; ಯಾವ ಗ್ರಾಮ ಪಂಚಾಯಿತಿಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ ಮತ್ತು ಇದಕ್ಕೆ ಪಾವತಿಸುತ್ತಿರುವ ಬಾಡಿಗೆ ಮೊತ್ತವೆಷ್ಟು; ಗ್ರಾಮ ಪಂಚಾಯಿತಿವಾರು ವಿವರ ನೀಡುವುದು? | ಹಾಸನ ಜಿಲ್ಲೆಯಲ್ಲಿ ಒಟ್ಟು 267 ಗ್ರಾಮ ಪಂಚಾಯತಿಗಳಿದ್ದು, 260 ಗ್ರಾಮ ಪಂಚಾಯತಿಗಳು ಸ್ವಂತ ಕಟ್ಟಡ ಹೊಂದಿರುತ್ತವೆ. ಅರಕಲಗೂಡು ತಾಲ್ಲೂಕಿನ 6 ಗ್ರಾಮ ಪಂಚಾಯತಿಗಳು ಪರ್ಯಾಯ ಸರ್ಕಾರಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ.<br><br>ಹಾಸನ ತಾಲ್ಲೂಕಿನ ಗಾಡೇನಹಳ್ಳಿ ಗ್ರಾಮ ಪಂಚಾಯತಿಯು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಮಾಸಿಕವಾಗಿ ರೂ.5000/- ಬಾಡಿಗೆಯನ್ನು ಪಾವತಿಸುತ್ತಿದೆ. |

ಸಂ. ಗ್ರಾಅಪ 230 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.